# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **991** (786) |
| ಉತ್ತರಿಸಬೇಕಾದ ದಿನಾಂಕ | : | 10.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಿಂದ ಬೆಂಗಳೂರು ನಗರ ಜಿಲ್ಲೆಯಲ್ಲಿ ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಸಂಖ್ಯೆ ಎಷ್ಟು; | ಕಳೆದ 3 ವರ್ಷಗಳಿಂದ ಅಂದರೆ 2017-18 ರಿಂದ 2020-21 ರವರೆಗೆ ಬೆಂಗಳೂರು ನಗರ ಜಿಲ್ಲೆಯಲ್ಲಿ ರಾಜ್ಯ ಸರ್ಕಾರದ ವಿವಿಧ ವಸತಿ ಯೋಜನೆಗಳಡಿಯಲ್ಲಿ ಒಟ್ಟು 126539 ಮನೆಗಳನ್ನು ಮಂಜೂರು ಮಾಡಲಾಗಿದೆ. |
| ಆ) | ಈ ಸಾಲಿನಲ್ಲಿ ಮಂಜೂರಾದ ಎಷ್ಟು ಮನೆಗಳ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸಿದೆ; ಪ್ರಗತಿಯಲ್ಲಿರುವ ಮನೆಗಳ ಸಂಖ್ಯೆ ಎಷ್ಟು; | ಕಳೆದ 3 ವರ್ಷಗಳಿಂದ ಅಂದರೆ 2017-18 ರಿಂದ 2020-21 ರ ವರೆಗೆ ಬೆಂಗಳೂರು ನಗರ ಜಿಲ್ಲೆಯಲ್ಲಿ ವಿವಿಧ ವಸತಿ ಯೋಜನೆಗಳಡಿಯಲ್ಲಿ ಒಟ್ಟು 126539 ಮನೆಗಳು ಮಂಜೂರು ಮಾಡಲಾಗಿದ್ದು, ಇದರಲ್ಲಿ 4288 ಮನೆಗಳು ಪೂರ್ಣಗೊಂಡಿದ್ದು, 11677 ಮನೆಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ (ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ). |
| ಇ) | ಮಂಜೂರಾದ ಮನೆಗಳ ನಿರ್ಮಾಣವನ್ನು ಎಷ್ಟು ಕಾಲಮಿತಿಯೊಳಗೆ ಸರ್ಕಾರ ಪೂರ್ಣಗೊಳಿಸಲಾಗುವುದು; | ಸರ್ಕಾರದ ಮನೆ ಮಾರ್ಗಸೂಚಿಯನ್ವಯ ನಿಗಮದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ. ಆದರೆ ಫಲಾನುಭವಿಗಳೇ ಮನೆಗಳನ್ನು ಸ್ವತಃ ನಿರ್ಮಿಸಿಕೊಳ್ಳುತ್ತಿದ್ದು, ನಿಗದಿಪಡಿಸಿದ ಕಾಲಮಿತಿಯೊಳಗಾಗಿ ಮನೆಗಳನ್ನು ಪೂರ್ಣಗೊಳಿಸುವಂತೆ ಜಿಲ್ಲಾಧಿಕಾರಿಗಳು / ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮುಖಾಂತರ ಸೂಕ್ತ ಅನುಸರಣಾ ಕ್ರಮ ಕೈಗೊಳ್ಳಲಾಗುತ್ತಿದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ವಿವಿಧ ಯೋಜನೆಯಡಿ ಮನೆಗಳು ಮಂಜೂರಾಗಿದ್ದರೂ, ಫಲಾನುಭವಿಗಳೇ ತಮ್ಮ ಸ್ವಂತ ಹಣದಲ್ಲಿ ಮನೆಗಳನ್ನು ನಿರ್ಮಿಸುತ್ತಿದ್ದು, ಸರಿಯಾದ ಸಮಯಕ್ಕೆ ಕಂತಿನ ಹಣ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 54 ಹೆಚ್‌ಎಎಂ 2019, ದಿನಾಂಕ: 16.11.2019 ರಲ್ಲಿ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ ಅರ್ಹಗೊಂಡ ಮನೆಗಳಿಗೆ ಆಧಾರ್ ಜೋಡಣೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಲ್ಲಿ ಆಗುತ್ತಿರುವ ವಿಳಂಬವನ್ನು ಗಮನಿಸಿ, ಸರ್ಕಾರವು ಆದೇಶ ಸಂಖ್ಯೆ :ವಇ 12 |
| ಉ) | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕಂತಿನ ಹಣವನ್ನು ಬಿಡುಗಡೆ ಮಾಡಲಾಗುವುದು ? | ಹೆಚ್‌ಎಹೆಚ್ 2020 ದಿನಾಂಕ:01.02.2021 & 02.02.2021 ರಲ್ಲಿ ವಿಜಿಲ್ ಆಪ್ ಮೂಲಕ ಪರಿಶೀಲಿಸಿ, ಅನುದಾನ ಬಿಡುಗಡೆ ಮಾಡಲು ದಿನಾಂಕ 31.03.2021 ರವರಗೆ ವಿನಾಯಿತಿ ನೀಡಲಾಗಿದ್ದು, ಅದರಂತೆ ಪ್ರಸ್ತುತ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವ ವಿಧಾನಗಳನ್ನು ಸರಳೀಕರಣಗೊಳಿಸಿ ಭೌತಿಕ ಪ್ರಗತಿಗನುಗುಣವಾಗಿ ಎಲ್ಲಾ ಅರ್ಹ ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ.<br><br>ಅದರಂತೆ ಕಳೆದ 3 ವರ್ಷಗಳಿಂದ ಬೆಂಗಳೂರು ನಗರ ಜಿಲ್ಲೆಯಲ್ಲಿ ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಬಿ.ಎಲ್.ಸಿ ಘಟಕದಡಿ ರೂ.28.62ಕೋಟಿ ಮತ್ತು ಎ.ಎಚ್.ಪಿ. ಘಟಕದಡಿ ರೂ.723.69ಕೋಟಿ ಹೀಗೆ ಒಟ್ಟಾರೆಯಾಗಿ ರೂ.752.31ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ :ವಇ 98 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

ಅನುಬಂಧ

| ಯೋಜನೆ | ಸಾಲು | ಆಯ್ಕೆ | ಪೂರ್ಣ | ಪ್ರಗತಿಯಲ್ಲಿರುವ ಮನೆಗಳು |
|---|---|---|---|---|
| ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ) | 17-18 | 1738 | 648 | 329 |
| ಅಂಬೇಡ್ಕರ್ ನಿವಾಸ್ ಯೋಜನೆ (ನ) | 17-18 | 17 | 5 | 4 |
| ಬಸವ ವಸತಿ ಯೋಜನೆ | 17-18 | 3858 | 1956 | 479 |
| | 18-19 | 1 | 1 | 0 |
| ಬಸವ ವಸತಿ ಯೋಜನೆ_ಹೆಚ್ಚುವರಿ | 17-18 | 469 | 221 | 55 |
| ದೇವರಾಜ ಅರಸ್ ವಸತಿ ಯೋಜನೆ (ಗ್ರಾ) | 17-18 | 9 | 1 | 3 |
| | 18-19 | 10 | 0 | 7 |
| | 19-20 | 1 | 0 | 1 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನ) | 17-18 ರಿಂದ 20-21 | 120292 | 1390 | 10768 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) | 19-20 | 6 | 0 | 1 |
| ವಾಜಪೇಯಿ ನಗರ ವಸತಿ ಯೋಜನೆ | 17-18 | 138 | 66 | 30 |
| | **ಒಟ್ಟು** | **126539** | **4288** | **11677** |